ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ನಗರ ಸ್ಥಳೀಯ ಸಂಸ್ಥೆಗಳ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಮೀಸಲಾತಿಯ ಕುರಿತು

ಶ್ರೀ ಮೋಹನ್ ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು ):-

936(1063) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಗೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿರುವ ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತಿಗಳ ಸಂಖ್ಯೆ ಎಷ್ಟು ಅವುಗಳಲ್ಲಿ ಚುನಾಯಿತ ಆಡಳಿತ ಮಂಡಳಿಯನ್ನು ಹೊಂದಿರುವ ಮತ್ತು ಆಡಳಿತಾಧಿಕಾರಿಯನ್ನು ಹೊಂದಿರುವ ಸ್ಥಳೀಯ ಸಂಸ್ಥೆಗಳ ಸಂಖ್ಯೆ ಎಷ್ಟು; (ಜಿಲ್ಲಾವಾರು, ಸ್ಥಳೀಯ ಸಂಸ್ಥೆಯವಾರು ಮಾಹಿತಿಯನ್ನು ನೀಡುವುದು)

(ಆ) ಕಳೆದ 2 ವರ್ಷಗಳಲ್ಲಿ ನಗರ ಸ್ಥಳೀಯ ಸಂಸ್ಥೆಗಳ ಸ್ವಂತ ಆದಾಯವೆಷ್ಟು ; ಸರ್ಕಾರದ ವಿವಿಧ ಯೋಜನಯಡಿ ಬಿಡುಗಡೆಯಾದ ಅನುದಾನವೆಷ್ಟು ; ವೆಚ್ಚವಾದ ಅನುದಾನವೆಷ್ಟು; ಉಳಿಕೆಯಾದ ಅನುದಾನವೆಷ್ಟು; (ವರ್ಷವಾರು ಸ್ಥಳೀಯ ಸಂಸ್ಥೆವಾರು, ಯೋಜನಾವಾರು ಮಾಹಿತಿ ಒದಗಿಸುವುದು)

(ಇ) ರಾಜ್ಯದಲ್ಲಿ ಸರ್ಕಾರದ ಅಸಹಾಯಕತೆ ಹಾಗೂ ನ್ಯಾಯಾಲಯದ ನಿರ್ಲಿಪ್ತತೆಯಿಂದ ಸ್ಥಳೀಯ ಸಂಸ್ಥೆಗಳಿಗೆ ಚುನಾವಣೆ ಜರುಗಿ 2 ವರ್ಷಗಳಾದರೂ ಸಹಾ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ಮೀಸಾಲಾತಿಯ ನಿರ್ಧಾರವಾಗದೇ ಜನಪ್ರತಿನಿಧಿಗಳ ಆಡಳಿತ ಮಂಡಳಿಯಿಲ್ಲದೇ ಅಭಿವೃದ್ಧಿ ಕಾರ್ಯಗಳು ಕುಂಟಿತವಾಗಿ ಆಯಾ ಸ್ಥಳೀಯ ಸಂಸ್ಥೆಯ ವ್ಯಾಪ್ತಿಯ ಜನರು ತೊಂದರೆ ಅನುಭವಿಸುತ್ತಿರುವುದು ನಿಜವೇ ; ನ್ಯಾಯಾಲಯದಲ್ಲಿ ಪ್ರಕರಣದ ಇತ್ಯರ್ಥಕ್ಕೆ ಸರ್ಕಾರದ ಕ್ರಮವೇನು ?